# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2104
ಸದಸ್ಯರ ಹೆಸರು : ಶ್ರೀ ಮಂಜುನಾಥ ಭಂಡಾರಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 17.03.2022
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಆಯವ್ಯಯ ಪತ್ರದಲ್ಲಿ ಘೋಷಿಸಿದ ಸಿದ್ಧಾಪುರ ಏತ ನೀರಾವರಿ ಯೋಜನೆಯ ಡಿ.ಪಿ.ಆರ್ ಮತ್ತು ನಕ್ಷೆಯನ್ನು ತಯಾರಿಸಲಾಗಿದೆಯೇ; (ಪ್ರತಿಯನ್ನು ಒದಗಿಸುವುದು) | ಅಜ್ರಿ, ಕೊಡ್ಲಾಡಿ, ಅಂಪಾರು, ಕರ್ಕುಂಜೆ ಹಾಗೂ ಸಿದ್ಧಾಪುರ ಗ್ರಾಮಗಳ ಸುಮಾರು 1200 ಹೆ. ಜಮೀನುಗಳಿಗೆ ನೀರಾವರಿ ಕಲ್ಪಿಸುವ ಗುರಿ ಹೊಂದಲಾಗಿರುವ ಸಿದ್ಧಾಪುರ ಏತ ನೀರಾವರಿ ಯೋಜನೆಯ ವಿವರವಾದ ಯೋಜನಾ ವರದಿಯು ಕರ್ನಾಟಕ ನೀರಾವರಿ ನಿಗಮದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| ಆ | ಈ ಯೋಜನೆಯು ಯಾವ ಗ್ರಾಮಗಳ ಮೂಲಕ ಹಾದು ಹೋಗುತ್ತದೆ; ಅದರ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿ ಯಾವುದು; ಈ ಯೋಜನೆಗೆ ತಗಲುವ ಅಂದಾಜು ವೆಚ್ಚ ಎಷ್ಟು; ಅಗತ್ಯವಾದ ನೀರಿನ ಪ್ರಮಾಣವೆಷ್ಟು | |
| ಇ) | ಈ ಯೋಜನೆಗೆ ಅಗತ್ಯವಾದ ಸರ್ಕಾರಿ, ಅರಣ್ಯ ಮತ್ತು ಪಟ್ಟಾ ಭೂಮಿಯ ವಿಸ್ತೀರ್ಣವೆಷ್ಟು, ಭೂಸ್ವಾಧೀನತೆಗೆ ತಗಲುವ ಅಂದಾಜು ವೆಚ್ಚವೆಷ್ಟು; | ಸಿದ್ಧಾಪುರ ಏತ ನೀರಾವರಿ ಯೋಜನೆಯ ವಿಸ್ತೃತ ಯೋಜನಾ ವರದಿಯಲ್ಲಿ ಭೂಸ್ವಾಧೀನ ಪ್ರಕ್ರಿಯೆಗೆ ಸಂಬಂಧಪಟ್ಟಂತೆ ರೂ.1.50 ಕೋಟಿ ಮೊತ್ತಕ್ಕೆ ಅವಕಾಶ ಕಲ್ಪಿಸಿದ್ದು, ವಿಸ್ತೃತ ಸರ್ವೆ ಕಾರ್ಯದ ಬಳಿಕವೇ ಭೂಸ್ವಾಧೀನತೆಯ ವಿಸ್ತೀರ್ಣವನ್ನು ತಿಳಿದು ತದನಂತರ ಯೋಜನೆಗೆ ಅಗತ್ಯವಾದ ಸರ್ಕಾರಿ, ಅರಣ್ಯ ಮತ್ತು ಪಟ್ಟಾ ಭೂಮಿಯ ವಿಸ್ತೀರ್ಣವನ್ನು ಅಂದಾಜಿಸಬೇಕಿರುತ್ತದೆ. |
| ಈ) | ಪ್ರಸ್ತುತ ಈ ಯೋಜನೆಯು ಯಾವ ಹಂತದಲ್ಲಿದೆ; ಈ ಯೋಜನೆಯನ್ನು ಯಾವಾಗ ಪ್ರಾರಂಭಿಸಲಾಗುವುದು? | ಸಿದ್ಧಾಪುರ ಏತ ನೀರಾವರಿ ಯೋಜನೆಯ ವಿವರವಾದ ಯೋಜನಾ ವರದಿಯು ಕರ್ನಾಟಕ ನೀರಾವರಿ ನಿಗಮದಲ್ಲಿ ಪರಿಶೀಲನೆಯಲ್ಲಿರುತ್ತದೆ. |

ಜಸಂಇ 88 ಎಂಎಲ್‌ಎ 2022

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು